| Sl. No. | Research Range | Particulars | Physical in Ha | Unit Cost / ha | Total Amount | EMD Amount | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | Mandya | Mallamagere / C.M. Gudda | 6.00 | 26232 | 1,57,392.00 | 4000.00 | |
| | Hoskote | Nallal / Gottipura | 13.00 | 26232 | 3,41,016.00 | 8600.00 | |
| | Kolar | Yeshwanthpura/ Hadigere / K.S. Gida | 12.00 | 26232 | 3,14,784.00 | 8000.00 | |
| | Total | | **40.00** | | | | |
| 2. | **Seedling seed Orchards** | | | | | | |
| | Bangalore | J.B. Kaval / Sulikere | 8.00 | 18687 | 1,49,496.00 | 3800.00 | |
| | Tumkur | Ankapura | 8.00 | 18687 | 1,49,496.00 | 3800.00 | |
| | Mandya | Mallamagere / C.M. Gudda | 8.00 | 18687 | 1,49,496.00 | 3800.00 | |
| | Hoskote | Nallal / Gottipura | 8.00 | 18687 | 1,49,496.00 | 3800.00 | |
| | Kolar | Yeshwanthpura/ Hadigere / K.S. Gida | 8.00 | 18687 | 1,49,496.00 | 3800.00 | |
| | Total | | **40.00** | | | | |
| 3. | **Vegetative Multiplication Garden / CMA** | | | | | | |
| | Bangalore | J.B. Kaval / Sulikere | 10.00 | 28916 | 2,89,160.00 | 7300.00 | |
| | Tumkur | Ankapura | 10.00 | 28916 | 2,89,160.00 | 7300.00 | |
| | Mandya | Mallamagere / C.M. Gudda | 10.00 | 28916 | 2,89,160.00 | 7300.00 | |
| | Hoskote | Nallal / Gottipura | 10.00 | 28916 | 2,89,160.00 | 7300.00 | |
| | Kolar | Yeshwanthpura/ Hadigere / K.S. Gida | 10.00 | 28916 | 2,89,160.00 | 7300.00 | |
| | **Total** | | **50.00** | | | | |
| 4 | **Progeny Trial Plot** | | | | | | |
| | Bangalore | J.B. Kaval / Sulikere | 4.00 | 20630 | 82,520.00 | 2100.00 | |
| | Tumkur | Ankapura | 4.00 | 20630 | 82,520.00 | 2100.00 | |
| | Mandya | Mallamagere / C.M. Gudda | 4.00 | 20630 | 82,520.00 | 2100.00 | |
| | Hoskote | Nallal / Gottipura | 4.00 | 20630 | 82,520.00 | 2100.00 | |
| | Kolar | Yeshwanthpura/ Hadigere / K.S. Gida | 4.00 | 20630 | 82,520.00 | 2100.00 | |
| | **Total** | | **20.00** | | | | |
| 5 | **Germ Plasm Bank** | | | | | | |
| | Bangalore | J.B. Kaval / Sulikere | 2.00 | 20630 | 41,260.00 | 1100.00 | |

| Sl. No. | Research Range | Particulars | Physical in Ha | Unit Cost / ha | Total Amount | EMD Amount | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | Tumkur | Ankapura | 2.00 | 20630 | 41,260.00 | 1100.00 | |
| | Mandya | Mallamagere / C.M. Gudda | 2.00 | 20630 | 41,260.00 | 1100.00 | |
| | Hoskote | Nallal / Gottipura | 2.00 | 20630 | 41,260.00 | 1100.00 | |
| | Kolar | Yeshwanthpura / Hadigere / K.S. Gida | 2.00 | 20630 | 41,260.00 | 1100.00 | |
| | **Total** | | **10.00** | | | | |
| 6 | **Seed Production Area (Non-Teak)** | | | | | | |
| | Bangalore | | 50.00 | 11328 | 5,66,400.00 | 11400.00 | |
| | Tumkur | | | 11328 | | | |
| | Mandya | | | 11328 | | | |
| | Hoskote | | 25.00 | 11328 | 2,83,200.00 | 7100.00 | |
| | Kolar | | | 11328 | | | |
| | **Total** | | **75.00** | | | | |
| 7 | **Identification of Plus Trees** | | | | | | |
| | Bangalore | - | 40 | 2980 | 1,19,200.00 | 3000 | |
| | Tumkur | - | 40 | 2980 | 1,19,200.00 | 3000 | |
| | Mandya | - | 40 | 2980 | 1,19,200.00 | 3000 | |
| | Hoskote | - | 40 | 2980 | 1,19,200.00 | 3000 | |
| | Kolar | | 40 | 2980 | 1,19,200.00 | 3000 | |
| | **Total** | | **200 Nos.** | | | | |

ಟೆಂಡರ್ ನಮೂನೆಯನ್ನು ದಿನಾಂಕ: 16–10–2008 ಮತ್ತು 24–10–2008 ರಂದು 1.00 ಗಂಟೆವರೆಗೆ ಕಚೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ. 200.00 (ತೆರಿಗೆ ಪ್ರತ್ಯೇಕ). ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿಡಿ ರೂಪದಲ್ಲಿ ಷೆಡ್ಯೂಲ್ ಕಾಲಂ ಸಂಖ್ಯೆ: 7 ರಲ್ಲಿರುವಂತೆ ಪ್ರತ್ಯೇಕವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಟೆಂಡರ್ ಫಾರಂನೊಂದಿಗೆ ಸಲ್ಲಿಸುವುದು.

**ನಿಬಂಧನೆಗಳು**

1. ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ. 200.00 (ತೆರಿಗೆ ಪ್ರತ್ಯೇಕ) ಪಾವತಿ ಮಾಡಿ ದಿನಾಂಕ: 16–10–2008 ಮತ್ತು 24–10–2008 ಕಚೇರಿ ಕೆಲಸದ ವೇಳೆಯಲ್ಲಿ 1.00 ಗಂಟೆಯವರೆಗೆ ಪಡೆಯತಕ್ಕದ್ದು. ಮತ್ತು ಈ ವಿಭಾಗದಲ್ಲಿ 2008–09ನೇ ಸಾಲಿಗೆ ತಮ್ಮ ಹೆಸರನ್ನು ನೋಂದಾಯಿಸಿಕೊಂಡಿರಬೇಕು.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ವಲಯವಾರು ಮತ್ತು ಕೆಲಸವಾರು ಮೊಹರು ಮಾಡಿ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 16–10–2008 ರಂದು ಸಂಜೆ 3.00 ಗಂಟೆಯವರೆಗೆ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 24–10–2008ರ ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಅರಣ್ಯ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು, ಈ ಎಲ್ಲಾ ಕೆಲಸಗಳನ್ನು ಋತುಮಾನಕ್ಕೆ ಅನುಗುಣವಾಗಿ (ಕಾಲಬದ್ಧ) ಆಯಾ ವಲಯ ಅರಣ್ಯಾಧಿಕಾರಿಗಳ ನಿರ್ದೇಶನ ಮತ್ತು ಮೇಲಧಿಕಾರಿಗಳ ನಿರ್ದೇಶನದಂತೆಯೂ ಜಾರಿಗೊಳಿಸಲು ಬದ್ಧರಾಗಿರಬೇಕು. ಮೇಲಿನ ಕೆಲಸಗಳು ಕಾಲಬದ್ಧವಾಗಿದ್ದು, ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್‌ಗೆ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತುಪಡಿಸಿದವುಗಳಾಗಿರುತ್ತವೆ ಮತ್ತು ಸ್ಥಳ

ಬದಲಾವಣೆಯಾದರೂ ಸಹ ಕೆಲಸಗಳನ್ನು ಗುರುತುಪಡಿಸಿಕೊಟ್ಟ ಸ್ಥಳದಲ್ಲಿ ಪೂರ್ಣಗೊಳಿಸಬೇಕಾಗುತ್ತದೆ. ಇನ್ನೂ ಹೆಚ್ಚಿನ ಕಾಮಗಾರಿಗಳನ್ನು ತಿಳಿಸಿ ಗುರುತುಪಡಿಸಿಕೊಟ್ಟ ಸ್ಥಳದಲ್ಲಿ ನಿರ್ವಹಿಸಬೇಕಾಗಿರುತ್ತದೆ.

5. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಯನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳ ವ್ಯವಸ್ಥೆಯನ್ನು ಸ್ವತಂತ್ರವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗಧಿಪಡಿಸಿರುವ ಇ.ಎಂ.ಡಿ ಮೊತ್ತಕ್ಕೆ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಡಿ.ಡಿ. ರೂಪದಲ್ಲಿ ಪಡೆದು ಪಾವತಿಸಬೇಕಾಗಿರುತ್ತದೆ.
7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅವುಗಳನ್ನು ತಿರಸ್ಕರಿಸಲಾಗುವುದು ಮತ್ತು ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗಧಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸುವುದಿಲ್ಲ.
9. ಯಾವುದೇ ಕಾರಣಗಳನ್ನು ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಈ ಮೇಲಿನ ಕಾಮಗಾರಿ ಅನುಷ್ಠಾನ ಸಂಬಂಧ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳಿಸುವ ಅನುದಾನ ಹಾಗೂ ಅನುಮೋದನೆಯ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣಕ್ಕೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
11. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ಸಹಾಯಕ ಅರಣ್ಯ ಕೃಷಿಕರುಗಳಿಂದ ತನಿಖೆ ಮಾಡಿಸಿ, ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಕ್ಷೇತ್ರ ಟಿಪ್ಪಣಿ ಪುಸ್ತಕದೊಂದಿಗೆ (ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ. ಮತ್ತು ಬಿಲ್ ಹಣ ಸಂದಾಯ ಮಾಡುವಾಗ ಬಿಲ್‌ಗಳಲ್ಲಿ ನಿಯಮದಂತೆ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆಯನ್ನು ಕಡಿತಗೊಳಿಸಲಾಗುವುದು. ಮತ್ತು ಆಗಿಂದಾಗ್ಗೆ ತೆರಿಗೆಗಳು ವ್ಯತ್ಯಾಸವಾದರೂ ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
12. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳು / ಸಂಶೋಧನಾ ಪ್ಲಾಟುಗಳನ್ನು ಹಾಳು ಮಾಡಿದ್ದಲ್ಲಿ, ಗಿಡ, ಮರಗಳನ್ನು ಕಡಿದು ನಾಶಪಡಿಸಿದ್ದಲ್ಲಿ ಸರ್ಕಾರಕ್ಕೆ ಆದ ನಷ್ಟವನ್ನು ಸಂಬಂಧಪಟ್ಟ ಗುತ್ತಿಗೆದಾರರಿಂದ ವಸೂಲು ಮಾಡಲಾಗುವುದು / ಬಿಲ್ಲುಗಳಲ್ಲಿ ಕಟಾವು ಮಾಡಲಾಗುವುದು ಮತ್ತು ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
13. ಟೆಂಡರ್‌ನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು "ಕರ್ನಾಟಕ ಸಾರ್ವಜನಿಕ ಸಂಗ್ರಹಣದಲ್ಲಿ ಪಾರದರ್ಶಕತೆ ಕಾಯ್ದೆ 1999 ಕಾಲಂ 27 (1) (ಎ) ದಂತೆ ಮೇಲೆ ನಮೂದಿಸಿದ ರೀತಿಯ ಕೆಲಸಗಳನ್ನು ಕರ್ನಾಟಕ ಅರಣ್ಯ ಇಲಾಖೆಯ ಯಾವುದೇ ವಿಭಾಗದಲ್ಲಿ ಕನಿಷ್ಠ ಒಂದು ವರ್ಷ ಸಮರ್ಪಕವಾಗಿ ನಿರ್ವಹಿಸಿದ ಅನುಭವ ಹೊಂದಿರಬೇಕು. ಹಾಗೂ ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಒದಗಿಸಬೇಕು.
14. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡೀಪಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
15. ಈ ಮೇಲಿನ ಕಾಮಗಾರಿಗಳು ಅನುದಾನ ಲಭ್ಯತೆಯ ಮೇಲೆ ಕೈಗೊಳ್ಳಬೇಕಾಗಿರುತ್ತದೆ. ಒಂದು ವೇಳೆ ಸರ್ಕಾರದಿಂದ ಅನುದಾನ ಬಿಡುಗಡೆಯಾಗುವುದು ತಡವಾದಲ್ಲಿ, ಇಲಾಖೆಯಿಂದ ಯಾವುದೇ ಬಡ್ಡಿಯನ್ನು ನೀಡಲಾಗುವುದಿಲ್ಲ.
16. ಯಶಸ್ವಿ ಟೆಂಡರ್‌ದಾರರು, ಟೆಂಡರ್ ಆದ ಕಾಮಗಾರಿಗಳನ್ನು ಕರಾರು ಪತ್ರ ಮಾಡಿಕೊಂಡ ದಿನಾಂಕದಿಂದ ಮೂರು ತಿಂಗಳೊಳಗೆ (3) ಕಾಮಗಾರಿಗಳನ್ನು ಮುಗಿಸಬೇಕಾಗಿರುತ್ತದೆ.

ಅರಣ್ಯ ಸಂರಕ್ಷಣಾಧಿಕಾರಿ,
ಸಂಶೋಧನೆ, ಬೆಂಗಳೂರು.

ಪಿ.ಆರ್. 503

## ಕೃಷಿ ಅಧಿಕಾರಿಗಳ ಕಛೇರಿ, ಮಣ್ಣು ಆರೋಗ್ಯ ಕೇಂದ್ರ, ಶಿವಮೊಗ್ಗ

### ಬಹಿರಂಗ ಹರಾಜು ಪ್ರಕಟಣೆ

**ಸಂ.ಸಿಬ್ಬಂದಿ/ವಿವ 20/2008–09, ದಿನಾಂಕ: 4ನೇ ಸೆಪ್ಟೆಂಬರ್ 2008**

**ವಿಷಯ:** ಕೃಷಿ ಅಧಿಕಾರಿ (ಮಣ್ಣು ಆರೋಗ್ಯ ಕೇಂದ್ರ) ಶಿವಮೊಗ್ಗ ಇವರ ಕಛೇರಿಯಲ್ಲಿರುವ ಅನುಪಯುಕ್ತ ಸಾಮಾಗ್ರಿಯನ್ನು ಬಹಿರಂಗ ಹರಾಜಿನ ಮೂಲಕ ವಿಲೇ ಮಾಡುವ ಬಗ್ಗೆ.

**ಉಲ್ಲೇಖ:** 1. ಕೃಷಿ ಆಯುಕ್ತರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಾಮಾನ್ಯ/ಜವ/ಅನುಪ/136/2007–08, ದಿನಾಂಕ: 30.04.2008.

2. ಜಂಟಿ ಕೃಷಿ ನಿರ್ದೇಶಕರು, ಶಿವಮೊಗ್ಗ ಇವರ ಆದೇಶ ಸಂಖ್ಯೆ:ಲೆಕ್ಕ 4:ವಿವ 78:2007–08, ದಿನಾಂಕ: 17.4.08.

ಈ ಕಛೇರಿಯಲ್ಲಿರುವ ಈ ಕೆಳಕಂಡ ಅನುಪಯುಕ್ತ ವಸ್ತುಗಳನ್ನು ಹೇಗಿವೆಯೋ ಹಾಗೆ ದಿನಾಂಕ: 22.10.2008 ರಂದು ಮಧ್ಯಾಹ್ನ 3.00 ಗಂಟೆಗೆ ಈ ಕಛೇರಿ ಆವರಣದಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು. ಇಚ್ಛೆಯುಳ್ಳವರು ನಿಗಧಿತ ಠೇವಣಿ ಹಣ ಪಾವತಿಸಿ ನಿಯಮಾನುಸಾರ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ವಸ್ತುವಿನ ವಿವರ | ಸಂಖ್ಯೆ | ವಿಕ್ರಯದ ಮಾದರಿ | ಸ್ಥಳ |
|---|---|---|---|---|
| 1. | ಸೈಲೆಂಟ್ ಜನರೇಟರ್ UPS ಸಿಸ್ಟಮ್ + 2 ಆಮ್ಕೋಬ್ಯಾಟರೀಸ್ | 1 | ಹರಾಜು | ಕೃಷಿ ಅಧಿಕಾರಿಗಳ ಕಛೇರಿ, (ಮಣ್ಣು ಆರೋಗ್ಯ ಕೇಂದ್ರ) ಶಿವಮೊಗ್ಗ |
| 2. | ಡಿಸ್ಟಿಲ್ ವಾಟರ್ ಪ್ಲಾಂಟ್ | 1 | ಹರಾಜು | - do - |
| 3. | ಸ್ಟೀಲ್ ರ್‍ಯಾಕ್ಸ್ 75x36x15 | 2 | ಹರಾಜು | - do - |
| 4. | ಬ್ರಾಸ್ ಡ್ರಮ್ (ಹಿತ್ತಾಳೆ ಡ್ರಮ್) | 1 | ಹರಾಜು | - do - |
| 5. | ಮರದ ಬೆಂಚು | 1 | ಹರಾಜು | - do - |
| 6. | ಸ್ಟೀಲ್ ಕಪ್ಸ್ ಮತ್ತು ಚಂಬು | 1 | ಹರಾಜು | - do - |
| 7. | ಸ್ಟೀಲ್ ಜಗ್ | 1 | ಹರಾಜು | - do - |
| 8. | ಪೋಸ್ಟಲ್ ವೈಯಿಂಗ್ ಬ್ಯಾಲೆನ್ಸ್ | 1 | ಹರಾಜು | - do - |
| 9. | ಪಂಚಿಂಗ್ ಮಿಷನ್ (double hole) | 1 | ಹರಾಜು | - do - |
| 10. | ಡಿಸ್ಟಿಲ್ ವಾಟರ್ ಪ್ಲಾಂಟ್ | 1 | ಹರಾಜು | - do - |
| 11. | ಸ್ಟೀಲ್ ರ್‍ಯಾಕ್ಸ್ 27x33x15 | 1 | ಹರಾಜು | - do - |
| 12. | ಸ್ಟೀಲ್ ಟ್ರೇಗಳು | 3 | ಹರಾಜು | - do - |
| 13. | ಫೋಲ್ಡಿಂಗ್ ಕುರ್ಚಿಗಳು | 8 | ಹರಾಜು | - do - |
| 14. | ಗೋದ್ರೇಜ್ ಲಾಕ್ಸ್ | 5 | ಹರಾಜು | - do - |
| 15. | ಸೇಫ್ ಚೆಸ್ಟ್ | 1 | ಹರಾಜು | - do - |
| 16. | ಟೀಕ್ ಉಡ್ ರೊಟೇಟಿಂಗ್ ಗ್ಲ್ಯಾಸ್ ಫ್ರೇಮ್ ಸ್ಟ್ಯಾಂಡ್ | 1 | ಹರಾಜು | - do - |
| 17. | ಮರದ ಪ್ರಯೋಗಾಲಯ ಟೇಬಲ್ 25x2x3 | 1 | ಹರಾಜು | - do - |

ಮೇಲ್ಕಂಡ ಸಾಮಾಗ್ರಿಗಳನ್ನು ಕಛೇರಿಯ ವೇಳೆಯಲ್ಲಿ ಅಂದರೆ ಬೆಳಿಗ್ಗೆ 10–00 ರಿಂದ ಸಾಯಂಕಾಲ 5.30 ರ ವರೆಗೆ ಪರಿಶೀಲಿಸಬಹುದಾಗಿದೆ.

**ಹರಾಜಿನ ಷರತ್ತುಗಳು**

1) ಹರಾಜಿನಲ್ಲಿ ಭಾಗವಹಿಸುವವರು ರೂ.3300–00 ಮೊತ್ತವನ್ನು EMD ಆಗಿ ಹರಾಜು ಪೂರ್ವದಲ್ಲಿ ನಗದಾಗಿ ಕಛೇರಿಯಲ್ಲಿ ಇಡಬೇಕು.
2) ಹರಾಜಿನಲ್ಲಿ ಹೆಚ್ಚು ಬಿಡ್ ಮಾಡಿದವರನ್ನು ಬಿಟ್ಟು ಉಳಿದವರ EMD ಮೊತ್ತವನ್ನು ಹರಾಜು ಪ್ರಕ್ರಿಯೆ ಮುಗಿದ ನಂತರ ಹಿಂದಿರುಗಿಸಲಾಗುವುದು.
3) ಹರಾಜಿನಲ್ಲಿ ಜಯಶೀಲರಾದವರು ಹರಾಜು ಮೊತ್ತದ ಶೇ.25 ರಷ್ಟು ಮೊತ್ತವನ್ನು ತಕ್ಷಣ ಪಾವತಿಸುವುದು. ಮೊತ್ತಕ್ಕೆ ಬಡ್ಡಿ ಇರುವುದಿಲ್ಲ.
4) ಉಳಿದ ಮೊತ್ತವನ್ನು ಮೇಲಾಧಿಕಾರಿಗಳಿಂದ ಅನುಮೋದನೆ ಬಂದ ನಂತರ 10 ದಿವಸದೊಳಗೆ ಪಾವತಿ ಮಾಡಬೇಕು.
5) ಹರಾಜಿನ ಸಾಮಾನನ್ನು ತಮ್ಮ ಸ್ವಂತ ವ್ಯವಸ್ಥೆಯ ಮೂಲಕ ತೆಗೆದುಕೊಂಡು ಹೋಗತಕ್ಕದ್ದು.
6) ಮೇಲಾಧಿಕಾರಿಗಳು ಅನುಮತಿ ನೀಡದ ಹೊರತು ಹರಾಜಿನ ವಸ್ತುಗಳನ್ನು ವಿಲೇ ಮಾಡಲಾಗುವುದಿಲ್ಲ.
7) ಹರಾಜು ಪ್ರಕ್ರಿಯೆಯನ್ನು ಕಾರಣ ನೀಡದೇ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ಈ ಕಛೇರಿಯ ಮುಖ್ಯಾಧಿಕಾರಿಗಳು ಹೊಂದಿರುತ್ತಾರೆ.

**ಜೆ.ಎಂ. ರಾಜಶೇಖರ**

ಪಿ.ಆರ್. 483

ಕೃಷಿ ಅಧಿಕಾರಿ ಮಣ್ಣು ಆರೋಗ್ಯ ಕೇಂದ್ರ,
ಶಿವಮೊಗ್ಗ.

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ, ಬಯಲಾಜಿಕಲ್ ಪಾರ್ಕ್, ಬೆಂಗಳೂರು – 83**

**ಮರು ಟೆಂಡರು ಪ್ರಕಟಣೆ**

**ಸಂಖ್ಯೆ: ಎ1–ಬಬಪಾ–ವಾನಿ–ಸಿಆರ್–1/2008–09, ದಿನಾಂಕ: 18ನೇ ಸೆಪ್ಟೆಂಬರ್ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2008–09ನೇ ಸಾಲಿಗೆ ಬನ್ನೇರುಘಟ್ಟ ಜೈವಿಕ ಉದ್ಯಾನವನ ವಾಹನ ನಿಲ್ದಾಣದಲ್ಲಿ ಪ್ರವಾಸಿಗರ ವಾಹನಗಳನ್ನು ನಿಲ್ಲಿಸಲು ಮೃಗಾಲಯ ಪ್ರಾಧಿಕಾರವು ನಿಗಧಿಪಡಿಸಿದ ದರದಲ್ಲಿ ವಾಹನ ನಿಲ್ದಾಣದ ನಿರ್ವಹಣೆ ಮತ್ತು ಶುಲ್ಕ ಸಂಗ್ರಹಿಸಲು ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಸದರಿ ಟೆಂಡರಿನಲ್ಲಿ ಭಾಗವಹಿಸುವವರು ಟೆಂಡರು ಅರ್ಜಿಯನ್ನು ಮೊಹರು ಮಾಡಿದ ಲಕೋಟೆಯಲ್ಲಿ ದಿನಾಂಕ: **16.10.2008** ರಂದು ಮಧ್ಯಾಹ್ನ **3.00** ಗಂಟೆ ಒಳಗಾಗಿ ಈ ಕೆಳ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಿದೆ.

**ಷರತ್ತುಗಳು:**

1. ಟೆಂಡರಿನಲ್ಲಿ ಭಾಗವಹಿಸುವವರು ತಮ್ಮ ವಿಳಾಸ ದಾಖಲೆ ತೋರಿಸಿ ರೂ. 563/–ಗಳನ್ನು (ತೆರಿಗೆಗಳು ಸಹಿತ) ಪಾವತಿಸಿ ಟೆಂಡರು ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 13.10.2008 ರಿಂದ 15.10.2008 ರವರೆಗೆ ಪಡೆಯಬಹುದು.
2. ಗುತ್ತಿಗೆದಾರರು ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ಅನ್ನು ಠೇವಣಿಯಾಗಿ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಟೆಂಡರಿನೊಂದಿಗೆ ಈ ಕೆಳ ಸಹಿದಾರರ ಪದನಾಮದ ಹೆಸರಿನಲ್ಲಿ ಸಲ್ಲಿಸತಕ್ಕದ್ದು.
3. ಟೆಂಡರು ದಿನಾಂಕ: 16.10.2008 ರಂದು 3.00 ಗಂಟೆಯವರೆಗೆ ಪಡೆದು ಸಂಜೆ 4.00 ಗಂಟೆಗೆ ತೆರೆಯಲಾಗುವುದು.
4. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯುವುದು.

ಕಾರ್ಯನಿರ್ವಾಹಕ ನಿರ್ದೇಶಕರು
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್,
ಬೆಂಗಳೂರು.

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE**

**BRIEF RE-TENDER NOTIFICATION**

**No. A1-BBP-VP-CR-1/2008-09, Dated: 18th September 2008**

It is hereby notified for the general information to the public that sealed tenders are invited and will be received by the Executive Director & Conservator of Forests, Bannerghatta Biological Park, Bangalore or any other officer duly authorized by him for "License to operate the Vehicle Parking Stand at Bannerghatta Biological Park for one year" i.e. for 2008-09 on 16.10.2008.

**CONDITIONS**

1. The prescribed blank tender documents will be issued by the office of the undersigned from **13.10.2008** to **15.10.2008** on payment of Rs.563/- including taxes on production of address proof, during office hours on working days.
2. The tender should be accompanied with an EMD of Rs. 1.00 lakh (Rupees one lakh only) which will be in the form of DD from nationalized banks and should be in favour of the Executive Director & Conservator of Forests, Bannerghatta Biological Park, Bangalore.
3. The completed tender documents will be received till 3.00 PM on 16.10.2008 and the same will be opened at 4.00 PM on the same day.
4. For further information/clarification, if any, the intending applicants may contact the above mentioned office at office hours.

Executive Director,
Bannerghatta Biological Park,
Bangalore.

P.D. 96

**ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್**
**(ಕರ್ನಾಟಕ ಮೃಗಾಲಯ ಪ್ರಾಧಿಕಾರದ ಒಂದು ಅಂಗ ಸಂಸ್ಥೆ)**
**ಕಾರ್ಯನಿರ್ವಾಹಕ ನಿರ್ದೇಶಕರು ಮತ್ತು ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ**
**ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು – 83**
**ಸಂಕ್ಷಿಪ್ತ ಟೆಂಡರು ಪ್ರಕಟಣೆ**

**ಸಂಖ್ಯೆ: ಎ2/ ಬಬಪಾ/ ಫೀಡ್/ ಸಿಆರ್–1/2008-2009, ದಿನಾಂಕ: 10ನೇ ಸೆಪ್ಟೆಂಬರ್ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2008-2009ನೇ ಸಾಲಿನಲ್ಲಿ ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನಲ್ಲಿರುವ ವನ್ಯಪ್ರಾಣಿಗಳಿಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವಂತೆ ದನದ ಮಾಂಸ ಸರಬರಾಜು ಮಾಡುವ ಬಗ್ಗೆ ಮರು ಟೆಂಡರನ್ನು ಕರೆಯಲಾಗಿದೆ. ಟೆಂಡರ್‌ದಾರರು ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನಲ್ಲಿ ನೊಂದಾಯಿಸಿದ ಗುತ್ತಿಗೆದಾರರಾಗಿರಬೇಕು. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಆರೋಗ್ಯ ಇಲಾಖೆ ಇವರಿಂದ ಟ್ರೇಡ್ ಲೈಸೆನ್ಸ್ ಸರ್ಟಿಫಿಕೇಟ್ ಹೊಂದಿರುವ ಮತ್ತು ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತ ಸಂಸ್ಥೆಯವರಿಂದ ದನದ ಮಾಂಸ ಸರಬರಾಜು ಬಗ್ಗೆ ದೃಢೀಕರಣ ಪತ್ರವನ್ನು ಹೊಂದಿರುವ ಗುತ್ತಿಗೆದಾರರು ಮಾತ್ರ ಅರ್ಹರಿರುತ್ತಾರೆ. ಮೊಹರು ಮಾಡಿದ ಟೆಂಡರನ್ನು ದಿನಾಂಕ: **18/10/ 2008** ರಂದು ಈ ಕಛೇರಿಯಲ್ಲಿ ಮಧ್ಯಾಹ್ನ 3.00 ಘಂಟೆ ಒಳಗೆ ಟೆಂಡರು ಸಲ್ಲಿಸುವುದು ಮತ್ತು **ಅದೇ ದಿನ ಸಂಜೆ 4.30 ಘಂಟೆಗೆ ಟೆಂಡರನ್ನು ತೆರೆಯಲಾಗುವುದು.**

| ಯೂನಿಟ್ ಸಂಖ್ಯೆ | ವಿವರಗಳು | ಟೆಂಡರಿಗೆ ಇಡಲಾದ ಆಹಾರ ಪದಾರ್ಥಗಳ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಸಲ್ಲಿಸಬೇಕಾದ ಇ.ಎಂ.ಡಿ ಹಣ (ರೂ. ಲಕ್ಷಗಳಲ್ಲಿ) |
|---|---|---|---|
| 1 | ಸಫಾರಿಗೆ ದನದ ಮಾಂಸ ಸರಬರಾಜು ಮಾಡುವುದು | 87.71 | 8.77 |
| 2 | ಮೃಗಾಲಯಕ್ಕೆ ದನದ ಮಾಂಸ ಸರಬರಾಜು ಮಾಡುವುದು | 13.95 | 1.39 |
| 3 | ಪುನರ್ವಸತಿ ಕೇಂದ್ರಕ್ಕೆ ದನದ ಮಾಂಸ ಸರಬರಾಜು ಮಾಡುವುದು | 76.61 | 7.66 |
| 4 | ಬಿ.ಎಫ್.ಎಫ್ ಹುಲಿಗಳಿಗೆ ದನದ ಮಾಂಸ ಸರಬರಾಜು ಮಾಡುವುದು | 6.71 | 0.67 |

**ಷರತ್ತುಗಳು:–**

1. ಗುತ್ತಿಗೆದಾರರು ಪ್ರತಿಯೊಂದು ಯೂನಿಟ್‌ಗೆ ರೂ. 563/– (ತೆರಿಗೆಗಳು ಸೇರಿ) ಹಣ ಪಾವತಿಸಿ ಪ್ರತ್ಯೇಕ ಟೆಂಡರ್ ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: **13/ 10/ 2008 ರಿಂದ 15/ 10/ 2008** ರವರೆಗೆ ಪಡೆಯಬಹುದು.
2. ಕರ್ನಾಟಕ ಸರ್ಕಾರದಿಂದ ಅನುಮೋದಿಸಲ್ಪಟ್ಟ ಕಸಾಯಿಖಾನೆಯ ಲೈಸೆನ್ಸ್ ಹೊಂದಿರುವ ಟೆಂಡರುದಾರರು ಮೇಲೆ ತಿಳಿಸಿದ ಲೈಸೆನ್ಸ್‌ಗಳನ್ನು ಈ ಕಛೇರಿಗೆ ನೀಡಿದ್ದಲ್ಲಿ ಮಾತ್ರ ಟೆಂಡರ್ ಫಾರಂನ್ನು ಕೊಡಲಾಗುವುದು.
3. ಇನ್ನು ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ನಿರ್ದೇಶಕರು,
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್,
ಬೆಂಗಳೂರು – 83.

**BANNERGHATTA BIOLOGICAL PARK**
**(A unit Under Zoo Authority of Karnataka)**
**Office of the Executive Director & Conservator of Forests, Bannerghatta Biological Park, Bangalore – 83**
**BRIEF TENDER NOTIFICATION**

**No. A2/ BBP/ FEED/ CR-1/ 2008-09, Date: 10th September 2008**

It is hereby notified for the general information of the public that sealed tenders are invited and will be received by the Executive Director & Conservator of Forests, Bannerghatta Biological Park,

Bangalore – 83 from the registered contractors of this office for supply of beef to the Captive Wild Animals of Bannerghatta Biological Park for the year 2008-2009 up to 3:00 PM on **18/ 10/ 2008**. Those who have got the Trade License Certificate from Bruhat Bangalore Mahanagara Palike, Health Department and Certificate from the Karnataka Meat & Poultry Marketing Corporation Limited proof of slaughter of beef are only eligible to participate in tender. The detailed in the schedule noted below. The tender shall be opened by Executive Director or an authorized officer by him on **18/10/ 2008 at 4:30 P.M.**

**SCHEDULE**

| Unit No. | Particulars of works | Approximate cost of the commodities put to tender (Rs. In lakhs) | EMD to be furnished (Rs. In lakhs) |
|---|---|---|---|
| 1. | Supply of Beef to Safaris | 87.71 | 8.77 |
| 2. | Supply of Beef to Zoo | 13.95 | 1.39 |
| 3. | Supply of Beef to Rescue Centre | 76.61 | 7.66 |
| 4. | Supply of Beef Born Free Foundation Tigers | 6.71 | 0.67 |

**CONDITIONS:-**

1. The tender forms will be available in the office of the undersigned during the office hours from **13/10/ 2008 to 15/10/2008** on payment of Rs. 563 (including taxes) at statutory rates separately for each unit.
2. They should produce Photo copy of the Government recognized slaughter house license while receiving the tender form.
3. Other detailed conditions can be had from the office of the undersigned during the office hours on working days.

Executive Director,
Bannerghatta Biological Park,
Bangalore – 83.

P.D. 97

**ನಿರ್ದೇಶಕರ ಕಛೇರಿ, ನ್ಯಾಯ ವಿಜ್ಞಾನ ಪ್ರಯೋಗಾಲಯಗಳು, ಮಡಿವಾಳ, ಬೆಂಗಳೂರು–68**

**ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**

**ಸಂ. ಸಂಗ್ರಹ.36/ನ್ಯಾವಿಪ್ರ/ 1339 / 2007–08, ದಿನಾಂಕ: 10ನೇ ಸೆಪ್ಟೆಂಬರ್ 2008**

**ವಿಷಯ:** ನ್ಯಾಯ ವಿಜ್ಞಾನ ಪ್ರಯೋಗಾಲಯದ ನಿರುಪಯುಕ್ತಗೊಳಿಸಿದ ವಾಹನವನ್ನು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂ. ಹೆಚ್‌ಡಿ.49/ಇಎಂವಿ/2005, ದಿನಾಂಕ: 07.02.2007.

ಸಾರ್ವಜನಿಕರಿಗೆ ಮಾಹಿತಿಗಾಗಿ ಈ ಮೂಲಕ ತಿಳಿಸುವುದೇನೆಂದರೆ ನ್ಯಾಯ ವಿಜ್ಞಾನ ಪ್ರಯೋಗಾಲಯದ 1985 ಮಾದರಿಯ ಬಜಾಜ್ ಟೆಂಪೊ ಮೆಟಡೋರ್ ಸಂ. ಸಿಎಜಿ–200 ವಾಹನವನ್ನು ವಿಲೇವಾರಿ ಮಾಡುವ ಸಲುವಾಗಿ ಟೆಂಡರ್ ಕಂ ಬಹಿರಂಗ ಹರಾಜನ್ನು ದಿನಾಂಕ 13.10.2008 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯ ಆವರಣದಲ್ಲಿ ನಡೆಸಲಾಗುವುದು. ಇಚ್ಚೆಯುಳ್ಳ ಸಾರ್ವಜನಿಕರು ಸದರಿ ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ನಿರುಪಯುಕ್ತ ವಾಹನವನ್ನು ಖರೀದಿಸಬಹುದಾಗಿದೆ.

ಈ ಟೆಂಡರ್ ಕಂ ಬಹಿರಂಗ ಹರಾಜನ್ನು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ನಡೆಸಲಾಗುವುದು. ಇದರಲ್ಲಿ ಭಾಗವಹಿಸುವ ಸಾರ್ವಜನಿಕರು ಈ ಕೆಳಕಂಡ ನಿಬಂಧನೆಗೆ ಒಳಪಟ್ಟಿರುತ್ತಾರೆ.

1. ಈ ನಿರುಪಯುಕ್ತ ವಾಹನವು ನ್ಯಾಯ ವಿಜ್ಞಾನ ಪ್ರಯೋಗಾಲಯದ ಆವರಣದಲ್ಲಿ ಇರುತ್ತದೆ. ಇದು ಹಾಲಿ ಯಾವ ಸ್ಥಿತಿಯಲ್ಲಿದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು. ಈ ವಾಹನವನ್ನು ಯಾವುದೇ ಕಛೇರಿ ಕರ್ತವ್ಯ ದಿನಗಳಂದು ಸಾರ್ವಜನಿಕರು ನೋಡಬಹುದು.
2. ಸದರಿ ವಿಲೇವಾರಿಯಲ್ಲಿ ಭಾಗವಹಿಸುವ ಸಾರ್ವಜನಿಕರು ಟೆಂಡರ್ ಕವರಿನೊಂದಿಗೆ ರೂ. 1,000.00 (ಒಂದು ಸಾವಿರ ರೂಪಾಯಿಗಳು) ಮಾತ್ರಗಳ ಡಿಮ್ಯಾಂಡ್ ಡ್ರಾಫ್ಟ್‌ನ್ನು ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ರವರ ಹೆಸರಿನಲ್ಲಿ ಠೇವಣಿಯಾಗಿ ನೀಡಬೇಕು.

3. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಹರಾಜಿಗೆ ಮುಂಚಿತವಾಗಿ ಸ್ಥಳದಲ್ಲಿಯೇ ರೂ. 1000.00 (ಒಂದು ಸಾವಿರ ರೂಪಾಯಿಗಳು) ಠೇವಣಿಯನ್ನು ನಗದಾಗಿ ಪಾವತಿಸಬೇಕು.
4. ಠೇವಣಿ ಇಲ್ಲದ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ. ಹಾಗೂ ಠೇವಣಿ ಮೊತ್ತಕ್ಕೆ ಯಾವುದೇ ಬಡ್ಡಿ ನೀಡುವುದಿಲ್ಲ.
5. ಟೆಂಡರ್ ಮೂಲಕ ಭಾಗವಹಿಸುವ ಟೆಂಡರ್‌ದಾರರು ದಿನಾಂಕ 15.09.2008 ರಿಂದ 07.10.2008ರವರೆಗೆ ಬೆಳಿಗ್ಗೆ 10.30 ಯಿಂದ ಸಂಜೆ 4.00 ಗಂಟೆಯ ಒಳಗೆ ಟೆಂಡರ್ ಫಾರಂಗಳನ್ನು ಉಚಿತವಾಗಿ ಪಡೆಯಬಹುದಾಗಿದೆ. ಸದರಿ ಟೆಂಡರ್ ಫಾರಂಗಳಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರ ಎರಡರಲ್ಲಿಯೂ ಬರೆಯಬೇಕು ಬೆಲೆ ಬರೆಯುವಾಗ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸತಕ್ಕದ್ದು.
6. ಮೊಹರು ಮಾಡಿದ ಟೆಂಡರ್ (ಸೀಲ್ಡ್ ಕವರ್) ಲಕೋಟೆಯನ್ನು ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯಗಳು, ಬೆಂಗಳೂರು ಇವರ ವಿಳಾಸಕ್ಕೆ ದಿನಾಂಕ: 10.10.2008 ರಂದು ಸಾಯಂಕಾಲ 4.00 ಗಂಟೆಯ ಒಳಗೆ ಕಳುಹಿಸಬೇಕು. ನಂತರ ಬಂದಂತಹ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ ಹಾಗೂ ಸದರಿ ಕವರಿನ ಮೇಲೆ ನಿರುಪಯುಕ್ತ ವಾಹನಗಳನ್ನು ಖರೀದಿಸುವ ಬಗ್ಗೆ ದಪ್ಪ ಅಕ್ಷರಗಳಲ್ಲಿ ಲಕೋಟೆಯಲ್ಲಿ ಮೇಲೆ ಬರೆಯಬೇಕು.
7. ಟೆಂಡರ್ ನಮೂನೆಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
8. ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು, ಬಿಡ್‌ದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
9. ದಿನಾಂಕ: 13.10.2008ರಂದು ಬೆಳಿಗ್ಗೆ 11.00 ಗಂಟೆಗೆ ನಡೆಯುವ ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆಯನ್ನು ದಾಖಲೆಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಸಾರ್ವಜನಿಕರ ಸಮಕ್ಷಮದಲ್ಲಿ ತೆಗೆದು ಬಹಿರಂಗಪಡಿಸಲಾಗುವುದು. ಟೆಂಡರ್ ಹಾಗೂ ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ದರವನ್ನು ಯಾರು ನಮೂದಿಸುವರೋ ಅವರನ್ನು ಯಶಸ್ವಿ ಟೆಂಡರ್ / ಬಿಡ್‌ದಾರರು ಎಂದು ಪರಿಗಣಿಸಲಾಗುವುದು.
10. ಯಶಸ್ವಿಯಾದ ಟೆಂಡರ್‌ದಾರರು ಮತ್ತು ಬಿಡ್‌ದಾರರು ಮೇಲ್ಕಂಡ ವಾಹನದ ಒಟ್ಟು ಬೆಲೆಯ ಶೇ 25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು 08 ದಿನಗಳೊಳಗೆ ಸಂಪೂರ್ಣ ಹಣ ಪಾವತಿ ಮಾಡಿ ಹರಾಜು ಮಾಡಲಾದ ವಾಹನವನ್ನು ತಮ್ಮ ಸ್ವಂತ ಖರ್ಚಿನಿಂದ ಕೊಂಡುಹೋಗತಕ್ಕದ್ದು. ತಪ್ಪಿದ್ದಲ್ಲಿ ಅವರು ತುಂಬಿದ ಶೇ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆ ಹೊರಡಿಸಿ ಮೇಲ್ಕಂಡ ವಾಹನವನ್ನು ಮರು ಹರಾಜು ಮಾಡಲಾಗುವುದು.
11. ಎಲ್ಲಾ ಹಣವನ್ನು ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯಗಳು ರವರ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು.
12. ಸರ್ಕಾರದ ವಾಹನಗಳ ಹರಾಜಿನಲ್ಲಿ ಭಾಗವಹಿಸುವ ಟೆಂಡರ್ / ಬಿಡ್‌ದಾರರು ಸರ್ಕಾರಿ ನಿಯಮಗಳನ್ನು ಪಾಲಿಸಬೇಕು.
13. ಹರಾಜಿನಲ್ಲಿ ಯಾವುದೇ ಟೆಂಡರ್ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯಗಳು ರವರು ಅಥವಾ ಇವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಹೊಂದಿರುತ್ತಾರೆ. ಇವರುಗಳ ನಿರ್ಣಯವೇ ಅಂತಿಮವಾದದ್ದು.
14. ಮೇಲೆ ತಿಳಿಸಿರುವ ಹರಾಜಿನ ಕಾರಣದಿಂದ ಯಾವುದೇ ವಾದ–ವಿವಾದ ಉದ್ಭವಿಸಿದಲ್ಲಿ ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯಗಳು, ಬೆಂಗಳೂರು ರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
15. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್ ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಹಿಂದಿರುಗಿಸಲಾಗುವುದು.
16. ನಿರುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲು ಮಾಡಲಾಗುವುದು.

ನಿರ್ದೇಶಕರು,
ನ್ಯಾಯ ವಿಜ್ಞಾನ ಪ್ರಯೋಗಾಲಯಗಳು,
ಬೆಂಗಳೂರು

ಪಿ.ಆರ್. 499

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಸಿಆಸುಇ 13 ಆಸೇವ 2008, ಬೆಂಗಳೂರು, ದಿನಾಂಕ: 24ನೇ ಮೇ 2008**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಗಳನ್ನು ಕೆ.ಎ.ಎಸ್ ಗ್ರೂಪ್–ಎ (ಕಿರಿಯ ಶ್ರೇಣಿ) ಹುದ್ದೆಗೆ 2006 ನೇ ತಂಡದಲ್ಲಿ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ E(1) 872/2007–08/PSC ದಿನಾಂಕ:11.1.2008ರ ರಾಜ್ಯಪತ್ರದಲ್ಲಿ ಪ್ರಕಟಿಸಿದೆ.

| ಕ್ರ. ಸಂ. | ಹೆಸರು ಶ್ರೀಯುತರು: | ವಿಳಾಸ |
|---|---|---|
| 1 | ಚಂದ್ರಶೇಖರ್ ಎನ್ | ನಂ.7, 4ನೇ ಬ್ಲಾಕ್ ಪೊಲೀಸ್ ಕ್ವಾಟ್ರಸ್, ಕೃಷ್ಣಾನಂದನಗರ, ನಂದಿನಿ ಲೇಔಟ್, ಬೆಂಗಳೂರು–560 096 |
| 2 | ಸುರೇಶ್ ಬಿ. ಇಟ್ನಾಳ್ | ಕೇರಾಫ್, ಶ್ರೀ ರಾಜಶೇಖರಮೂರ್ತಿ ಎಂ. "ಕನಸು" ಆರ್.ಎಂ.ಸಿ. ಮಾರ್ಕೆಟ್ ಎದುರು ನಂಜನಗೂಡು ರಸ್ತೆ ಟಿ. ನರಸೀಪುರ, ಮೈಸೂರು–571 124 |
| 3 | ಪ್ರಭು. ಜಿ | ಶಾರದ ಸ್ಕೂಲ್ ಹತ್ತಿರ, ವಿ.ವಿ. ನಗರ, ಶುಗರ್ ಫ್ಯಾಕ್ಟರಿ ಅಂಚೆ, ಹಿರಿಯೂರು ಚಿತ್ರದುರ್ಗ–572 144 |
| 4 | ಕೆ.ಎನ್. ಅನುರಾಧ | ಮನೆ ನಂ. 1760, ಹೌಸಿಂಗ್ ಬೋರ್ಡ್ ಕ್ವಾಟ್ರಸ್, ವಿಜಯನಗರ, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ–563 114 |
| 5 | ನಾಗರಾಜ ಎನ್.ಎಂ. | ನೆಲವಾಗಿಲು, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ–562 122 |
| 6 | ಬಸವರಾಜು ಎ.ಬಿ | ಕೇರಾಫ್ ಎಚ್.ಎನ್. ದಿನಕರ್ ನಂ. 37, 1ನೇ ಕ್ರಾಸ್, 2ನೇ ಹಂತ ಗಂಗೋತ್ರಿ ಲೇಔಟ್, ಮೈಸೂರು–570 009 |
| 7 | ರೂಪಾ ಐ.ಪಿ | ನಂ. 7 "ಶ್ರೀಶಶಾಂಕ" ದೇವಯ್ಯ ಗಾರ್ಡನ್ ಎದುರು, ಆರ್.ಎಂ.ವಿ. 2ನೇ ಹಂತ, ನಾಗಶೆಟ್ಟಿಹಳ್ಳಿ, ಬೆಂಗಳೂರು–560 094 |
| 8 | ಎಂ. ಶಿಲ್ಪ | ಮನೆ ನಂ 5630, 2ನೇ ಕ್ರಾಸ್, 2ನೇ ಮುಖ್ಯ ರಸ್ತೆ, ಪುಷ್ಕರಣಿ, ಶಾಲೆ ಹತ್ತಿರ ವಿಜಯನಗರ 2ನೇ ಹಂತ, ಮೈಸೂರು–570 017 |
| 9 | ನವೀನ್‌ಕುಮಾರ್ ರಾಜು ಎಸ್ | ನಂ. 1881, ಎಂ. ಸಿದ್ದಲಿಂಗೇಶ್ವರ ನಿಲಯ, ಅವಲಹಳ್ಳಿ ಮುಖ್ಯ ರಸ್ತೆ, ರಾಘವೇಂದ್ರ ಬ್ಲಾಕ್, 12ನೇ ಮೇನ್, ಕೆನರಾ ಬ್ಯಾಂಕ್ ಹತ್ತಿರ ಶ್ರೀನಗರ, ಬೆಂಗಳೂರು–560 050 |
| 10 | ಮಹೇಶ್ .ಎಂ | ಮನೆ ನಂ 1078, 1ನೇ ಅಡ್ಡರಸ್ತೆ, 4ನೇ ಹಂತ, ಬಿ.ಕೆ. ಲೇಔಟ್, ಕುವೆಂಪುನಗರ, ಮೈಸೂರು–570 023 |
| 11 | ಸೋಮಶೇಖರ್ ಎಸ್.ಜಿ | ನಂ.12, ಬುದ್ದಮಾರ್ಗ, ಕೆನರಾ ಬ್ಯಾಂಕ್ ಹತ್ತಿರ ಸಿದ್ದಾರ್ಥ ನಗರ, ಮೈಸೂರು–570 011 |

| ಕ್ರ. ಸಂ. | ಹೆಸರು ಶ್ರೀಯುತರು: | ವಿಳಾಸ |
|---|---|---|
| 12 | ವಸಂತಲಕ್ಷ್ಮಿ ಬಿ.ವಿ | W/o ಜಿ.ಎಸ್. ಅಮರನಾಥ್ ನಂ. 1, 4ನೇ ಅಡ್ಡರಸ್ತೆ, ಎಂ.ವಿ. ಲೇಔಟ್, ಶಾಂಪುರ, ಬೆಂಗಳೂರು–560 045 |
| 13 | ಲಿಂಗಮೂರ್ತಿ ಜಿ. | ಕೇರಾಫ್ ಜಿ. ಕೃಷ್ಣ, ಅಡ್ವೋಕೇಟ್, ನಂ. 208, 7ನೇ ಅಡ್ಡರಸ್ತೆ ಮೊದಲನೇ ಮೇನ್ ಬಸವೇಶ್ವರನಗರ, ಬಳ್ಳಾರಿ–583, 103 |
| 14 | ರಂಗಪ್ಪ ಎಸ್. | ನಂ. 394, 1ನೇ ಮಹಡಿ 9ನೇ ಮೇನ್, 6ನೇ ಅಡ್ಡರಸ್ತೆ, ಅವಲಹಳ್ಳಿ, ಬಿ.ಡಿ.ಎ. ಲೇಔಟ್, ಬಿ.ಎಸ್.ಕೆ. 3ನೇ ಹಂತ, ಬೆಂಗಳೂರು–560 085 |
| 15 | ಪ್ರಸನ್ನ ಹೆಚ್. | ಕಬ್ಬಿಗರಹಳ್ಳಿ, ಸಿಂದಿಗೆರೆ ಅಂಚೆ, ಚಿಕ್ಕಮಗಳೂರು ತಾಲ್ಲೂಕು ಜಿಲ್ಲೆ–577 146 |
| 16 | ಇಬ್ರಾಹಿಂ ಮೈಗೂರ್ | ಸರ್ಕಾರಿ ಪ್ರೌಢಶಾಲೆ ಕೆ. ಬೈರಾಪುರ (ಮೈನ್ಸ್) ಕೆಂಬಾಳು ಅಂಚೆ ಬಾಗೂರ್ ಹೋಬಳಿ, ಚನ್ನರಾಯಪಟ್ಟಣ ತಾ: ಹಾಸನ ಜಿಲ್ಲೆ–573 111 |
| 17 | ಪದ್ಮ ಬಸವಂತಪ್ಪ | ಶ್ರೀ ರಂಗ ಬಿಲ್ಡಿಂಗ್, ಫ್ಲಾಟ್ ನಂ. 10 14ನೇ ಅಡ್ಡರಸ್ತೆ ರಾಣಿ ಚೆನ್ನಮ್ಮ ನಗರ, ಧಾರವಾಡ–580 001 |
| 18 | ಶಶಿಧರ್ ಕುರೇರ | ಗಂದಿಗೆವಾಡ ಗ್ರಾಮ ಮತ್ತು ಅಂಚೆ, ಖಾನಾಪುರ ತಾಲ್ಲೂಕು ಬೆಳಗಾಂ–591 112 |
| 19 | ಸದಾಶಿವ ಪ್ರಭು ಬಿ. | ಬಿಂಬರಬೈಲ್ ಹೌಸ್, ಎಲ್ಲಾರೆ ಗ್ರಾಮ ಮತ್ತು ಅಂಚೆ, ಕಾರ್ಕಳ ತಾಲ್ಲೂಕು ಉಡುಪಿ ಜಿಲ್ಲೆ–574 108 |
| 20 | ಪ್ರಕಾಶ್ ಜಿ.ಟಿ. ನಿಟ್ಟಾಲಿ | ಎನ್.ಸಿ.ಸಿ. ಕಛೇರಿ, ಎದುರು ಹಟಲಗೇರಿ ನಾಕಾ, ಮಾಸರಿ ಗದಗ, ಗದಗ ಜಿಲ್ಲೆ–582 101. |

2) ಮೇಲ್ಕಂಡ ಅಭ್ಯರ್ಥಿಗಳನ್ನು ರೂ. 15200–25650 ರ ವೇತನ ಶ್ರೇಣಿಯ ಕೆ.ಎ.ಎಸ್ ಸಮೂಹ–ಎ ಕಿರಿಯ ಶ್ರೇಣಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ (On Probation) ಈ ಮೂಲಕ ನೇಮಕ ಮಾಡಲಾಗಿದೆ.

3) ಪರೀಕ್ಷಾರ್ಥಿಗಳ ಪರೀಕ್ಷಾರ್ಥ ಅವಧಿಯು ಎರಡು ವರ್ಷಗಳಾಗಿರುತ್ತವೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ಕೆ.ಎ.ಎಸ್ ಗ್ರೂಪ್–ಎ (ಕಿರಿಯ ಶ್ರೇಣಿ) ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

4) ಈ ನೇಮಕಾತಿಯು ಭಾರತದ ಸರ್ವೋಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ:232/1999ರಲ್ಲಿ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೊಳಪಟ್ಟಿರುತ್ತದೆ. ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಬಾಕಿ ಇರುವ ಅರ್ಜಿ ಸಂಖ್ಯೆ:7841/2006 7968/2006 ಮತ್ತು 4634/2007ರಲ್ಲಿ ನ್ಯಾಯಮಂಡಳಿಯು ನೀಡುವ ಅಂತಿಮ ತೀರ್ಪಿಗೊಳಪಟ್ಟಿರುತ್ತದೆ.

5) ಈ ಅಧಿಸೂಚನೆಯನ್ನು ನೊಂದಾಯಿತ ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಯು ಸರ್ಕಾರದ ಉಪಕಾರ್ಯದರ್ಶಿ, ಸಿ.ಆ.ಸು.ಇ (ಸೇವೆಗಳು) ಕೊಠಡಿ ಸಂಖ್ಯೆ:15, ವಿಧಾನಸೌಧ, ಇವರ ಮುಂದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು, ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್. 498

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**COMMERCIAL TAXES DEPARTMENT**

**Office of the Commissioner of Commercial Taxes, Gandhinagar, Bangalore-560 009**

**FORM-1**

**(See Rule-9)**

**NOTIFICATION**

Shri **PARVATHAPPA.S.** working as Commercial Tax Inspector in the Commercial Tax Department of the Assistant Commissioner of Commercial Taxes, (D.M)-1, Gadag is permitted to change his name to **PARVATHAGOWDA.S.**

Signature and Designation of the Appointing Authority.

P.D. 134

**FORM - IV**

**(See Rule 12)**

**NOTICE**

It is hereby notified that the undersigned has changed his/her name from **GIRIYAPPA DURGAPPA MADAR** to **GIRIYAPPA DURGAPPA HOSAMANI**

P.D. 135 **GIRIYAPPA DURGAPPA MADAR**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **SHANKAR.IRAPPA.ANGADI.** to **SHANKAR. IRAPPA. PATIL**

P.D. 136 **SHANKAR.IRAPPA.ANGADI.**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **VEERAPPA CHANNABASAPPA KSHOURAD, POLICE CONSTABLE, BENDIGERI, PS, HUBLI** to **VEERAPPA CHANNABASAPPA HEBBAL, POLICE CONSTABLE, BENDIGERI, PS. HUBLI.**

P.D. 137 **VEERAPPA CHANNABASAPPA KSHOURAD**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **SHARANAMMA** to **SHARADHA.**

P.D. 138 **SHARANAMMA**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **SOUMYASHREE NARAYAN SHETTY** to **SOUMYASHREE RAJU CHIMMALAGI.**

P.D. 139 **SOUMYASHREE NARAYAN SHETTY**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **MALAKAPPA BASAPPA CHALAWADI** to **MALAKAPPA BASAPPA ANGADAGERI.**

P.D. 140 **MALAKAPPA BASAPPA CHALAWADI**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **MACHCHENDRANATH SATTYAPPA KAMBLE** to **MACHCHENDRANATH SATTYAPPA PATIL.**

P.D. 141 **MACHCHENDRANATH SATTYAPPA KAMBLE**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **BASAPPA RANGAPPA MADAR** to **BASAVARAJ RANGAPPA MURANAL.**

P.D. 143 **BASAPPA RANGAPPA MADAR**

**ಪದವಿ ಪೂರ್ವ ಶಿಕ್ಷಣ ಇಲಾಖೆ**

**ಆಯುಕ್ತರ ಕಛೇರಿ ಪದವಿ ಪೂರ್ವ ಶಿಕ್ಷಣ ಇಲಾಖೆ 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–12**

**(ನಮೂನೆ–1)**

[9ನೇ ನಿಯಮ ನೋಡಿ]

**ಅಧಿಸೂಚನೆ**

ಶ್ರೀ/ಶ್ರೀಮತಿ **ಚಿದಾನಂದ. ಸೀತಾರಾಮ.ಬಡಿಗೇರ** ರವರು ಇಂಗ್ಲಿಷ್ ಉಪನ್ಯಾಸಕರಾಗಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ ಬೆಂಗಳೂರು ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಚಿದಾನಂದ ಸೀತಾರಾಮ. ಬೆಳಗಾಂವ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಪಿ.ಡಿ. 144 ನೇಮಕಾಧಿಕಾರಿಯವರ ಸಹಿ ಮತ್ತು ಪದನಾಮ

**ಪೊಲೀಸ್ ಇಲಾಖೆ**

**ಪೊಲೀಸ್ ಅಧೀಕ್ಷಕರವರ ಕಾರ್ಯಾಲಯ, ಬಾಗಲಕೋಟೆ ಜಿಲ್ಲೆ, ಸೆಕ್ಟರ್ ನಂ.23, ನವನಗರ, ಬಾಗಲಕೋಟೆ**

**(ನಮೂನೆ–1)**

[9ನೇ ನಿಯಮ ನೋಡಿ]

**ಅಧಿಸೂಚನೆ**

ಶ್ರೀ/ಶ್ರೀಮತಿ **ಹಣಮಂತ. ರಾಣಪ್ಪ. ಮಾದರ** ರವರು APC 206 ಆಗಿ ಆರ್.ಪಿ.ಐ. ಡಿ.ಎ.ಆರ್. ಬಾಗಲಕೋಟೆ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ಹಣಮಂತ ರಾಣಪ್ಪ ರಂಗಣ್ಣವರ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಪಿ.ಡಿ. 145 ನೇಮಕಾಧಿಕಾರಿಯವರ ಸಹಿ ಮತ್ತು ಪದನಾಮ

**ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ**

**ತಿದ್ದೋಲೆ**

ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶ ಸಂಖ್ಯೆ ಎಲ್‌ಸಿಎ II 176/2008 ದಿ: 27.6.2008 ರಲ್ಲಿಚಿತ್ರದುರ್ಗ ನ್ಯಾಯಾಂಗ ಘಟಕಕ್ಕೆ ಒಂದು ಶೀಘ್ರಲಿಪಿಗಾರರ ಹುದ್ದೆಯನ್ನು ಅಂತರ್ಜಿಲ್ಲಾ ವರ್ಗಾವಣೆ ಮೂಲಕ ಭರ್ತಿ ಮಾಡಿದ್ದರಿಂದ ಈ ಕಛೇರಿ ಅಧಿಸೂಚನೆ ಸಂಖ್ಯೆ 1/2008 ದಿ: 23.6.2008 ರ ಕ್ರಮ ಸಂಖ್ಯೆ I ರ ಅಡಿ ಪ್ರವರ್ಗ–3ಎ (ಇತರೆ) ಕೆಳಗೆ ಆಹ್ವಾನಿಸಿದ್ದ ಶೀಘ್ರಲಿಪಿಗಾರರ ಒಂದು ಹುದ್ದೆಯನ್ನು ನೇಮಕಾತಿ ಪ್ರಕ್ರಿಯೆಯಿಂದ ಕೈಬಿಡಲಾಗಿದೆ. ಆದುದರಿಂದ, ಮೇಲ್ಕಂಡ ಅಧಿಸೂಚನೆಯಡಿ ಪ್ರವರ್ಗ–3ಎ (ಇತರೆ) ಶೀಘ್ರಲಿಪಿಗಾರರ ಒಂದು ಹುದ್ದೆಯ ನೇಮಕಾತಿಗಾಗಿ ಸ್ವೀಕರಿಸಿದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಸ್ಥಳ: ಚಿತ್ರದುರ್ಗ **ಟಿ. ನಂಜಪ್ಪ**

ದಿನಾಂಕ: 19.9.2008 ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,

ಪಿ.ಆರ್. 509 ಚಿತ್ರದುರ್ಗ.